| ಕ್ರ.ಸಂ. | ವಿವರ | ಯೋಜನೆ | ಯೋಜನೇತರ |
|---|---|---|---|
| 1 | ಕರ್ನಾಟಕ ಸಾಹಿತ್ಯ ಅಕಾಡೆಮಿ | 3,00,000-00 | 4,00,000-00 |
| 2 | ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ | 4,00,000-00 | 25,000-00 |
| 3 | ಕರ್ನಾಟಕ ಶಿಲ್ಪಕಲಾ ಅಕಾಡೆಮಿ | 4,00,000-00 | 26,000-00 |
| 4 | ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿ | 4,00,000-00 | 25,000-00 |
| 5 | ಕರ್ನಾಟಕ ಕೊಡವ ಸಾಹಿತ್ಯ ಅಕಾಡೆಮಿ | 4,00,000-00 | 25,000-00 |
| | ಒಟ್ಟು | 19,00,000-00 | 5,01,000-00 |

ಈ ವೆಚ್ಚದಲ್ಲಿ ರೂ. 19.00 ಲಕ್ಷ (ಹತ್ತೊಂಬತ್ತು ಲಕ್ಷ ರೂಪಾಯಿಗಳು ಮಾತ್ರ) ಗಳನ್ನು ಲೆಕ್ಕಶೀರ್ಷಿಕೆ "2205-00-102-04-01-101 (ಯೋಜನೆ) ಯಡಿ ಹಾಗೂ ರೂ. 5.01 ಲಕ್ಷ (ಐದು ಲಕ್ಷ ಒಂದು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಲೆಕ್ಕಶೀರ್ಷಿಕೆ "2205-00-102-04-01-101- (ಯೋಜನೇತರ) ಯಡಿಯಲ್ಲಿಯೂ ಭರಿಸತಕ್ಕದ್ದು.

ಈ ಆದೇಶವನ್ನು ಆದೇಶ ಸಂ: ಎಫ್‌ಡಿ 1 ಟಿಎಫ್‌ಪಿ 96, ದಿ: 10.7.96 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1228

**ಎನ್.ಎಲ್. ಹೊಟಕರ**

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

## FINANCE SECRETARIAT

**Sub:** Dearness Allowance - Revision of rates.

**Read:** 1. G.O. No. FD 5 SRP 2004, dated 2-7-2004.

**Order No. FD 17 SRP 2004, Bangalore, Dated 3rd November 2004**

Government are pleased to sanction increase in the rates of Dearness Allowance from existing 61% to 64% of the basic pay to the State Government employees with effect from 1st July 2004.

2. The increase in Dearness Allowance admissible under this order is payable in cash from the month of October 2004 onwards, until further orders.

3. The increase in Dearness Allowance under this order for the period from July 2004 to September 2004 (both months inclusive) shall be credited to the General Provident Fund Accounts of the employees who are subscribers to the General Provident Fund and in cases of employees who are not subscribers to the General Provident Fund it shall be invested in NSC VIII issue in multiples of Rs. 100/- in accordance with the procedure prescribed in O.M. No. FD 5 TFC 88 dated 25.2.1988. The balance of less than Rs. 100/- if any, shall be paid in cash.

4. In the case of a Government Employee/Grant-in-Aid employee who ceases to be in service due to retirement during the period from 1st July 2004 to 30th September 2004, the Dearness Allowance payable under this order for the said period shall be paid in cash.

5. In the case of a Government Employee who dies while in service before the Dearness Allowance admissible under this order is invested, such arrears shall be paid in cash.

6. These orders will apply to the full time Government employees, employees of Zilla Panchayats, work charged employees on regular time scale of pay, the full time employees of Aided Educational Institutions and Universities who are on regular time scales of pay. these orders will also apply to the Judicial Officers, and to the Teaching Staff, Librarians and Physical Education Personnel who are on UGC/AICTE/ICAR scales of pay.

7. For the purpose of this order, the term 'Basic Pay' means, pay drawn by a Government Employee in the scale of pay applicable to the post held by him and includes:-

a) Stagnation increment, if any, granted to him above the maximum of the scale of pay.
b) Personal Pay, if any, granted to him under sub-rule (3) of Rule 7 of the Karnataka Civil Services (Revised Pay) Rules, 1999.

8. Basic Pay shall not include any emoluments other than those specified above.

9. In respect of Teachers, Librarians, Physical Education Personnel who are still continuing in the pre-revised UGC, AICTE and ICAR scales of pay, basic pay includes Dearness Allowance sanctioned up to 1.1.1996 vide G.O. No. FD 8 SRP 96 dated 8.5.1996.

10. The payment on account of Dearness Allowance involving fractions of 50 paise and above shall be rounded off to the next rupee and fractions less than 50 paise shall be ignored.

11. The Dearness Allowance will be shown as a distinct element of remuneration and will not be treated as pay for any purpose.

By Order and in the Name of the Governor of Karnataka.

**N.T. Naik**

PR-1229

Deputy Secretary to Government,
Finance Department (Services-2).

**ಲೋಕೋಪಯೋಗಿ ಸಚಿವಾಲಯ**

**ತಿದ್ದುಪಡಿ**

**ಸಂ. ಲೋಇ 250 ಸೇಎಸು 2004, ಬೆಂಗಳೂರು, ದಿನಾಂಕ 29th October 2004**

ಭಾರತದ ಸಂವಿಧಾನದ 85ನೇ ತಿದ್ದುಪಡಿಯನ್ನು ಜಾರಿಗೊಳಿಸಿದ್ದರ ಪರಿಣಾಮವಾಗಿ, ಕರ್ನಾಟಕ ಸರ್ಕಾರವು ದಿನಾಂಕ 27-4-1978 ರಿಂದ ಜಾರಿಗೆ ಬರುವಂತೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಅಧಿಕಾರಿ/ನೌಕರರಿಗೂ ಪದೋನ್ನತಿಯೊಂದಿಗೆ ಜೇಷ್ಠತೆಯನ್ನು ನೀಡಬೇಕೆಂದು ಅವಕಾಶ ಕಲ್ಪಿಸಿ ಎರಡು ಸುಗ್ರೀವಾಜ್ಞೆಗಳನ್ನು ಜಾರಿಗೆ ತಂದ ಪರಿಣಾಮವಾಗಿ, ಬಡಪ್ಪನವರ್‌ರವರ ಪ್ರಕರಣದ ಪ್ರಕಾರ ತಯಾರಿಸಿ ಹೊರಡಿಸಿದ್ದ ಲೋಕೋಪಯೋಗಿ ಮತ್ತು ಜಲಸಂಪನ್ಮೂಲ ಇಲಾಖೆಗೆ ಸೇರಿದ ಇಂಜಿನಿಯರುಗಳ ಜೇಷ್ಠತಾ ಪಟ್ಟಿಗಳನ್ನು ಪರಿಷ್ಕರಿಸುವ ಅಗತ್ಯತೆ ಉಂಟಾಗಿದ್ದರಿಂದ, ಸಹಾಯಕ ಕಾರ್ಯಪಾಲಕ ಇಂಜಿನಿಯರುಗಳ ಪದವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ 11-4-2002ರ ಅಧಿಸೂಚನೆ ಸಂಖ್ಯೆ ಪಿಡಬ್ಲ್ಯೂಡಿ 132 ಎಸ್‌ಎಜಿ 2002 ರಲ್ಲಿ ಹಾಗೂ ಕಾರ್ಯಪಾಲಕ ಇಂಜಿನಿಯರುಗಳ ಪದವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ 11-4-2002ರ ಅಧಿಸೂಚನೆ ಸಂ. PWD 84 SPG 2002 ರಲ್ಲಿ ಪ್ರಕಟಿಸಲಾಗಿದೆ.

ದಿನಾಂಕ 11-4-2002ರ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-1)ರ ಹಾಗೂ ಕಾರ್ಯಪಾಲಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಸಿ.ಪಿ. ಪಾಟೀಲ್, ಜೇಷ್ಠತೆಯು ಅನುಕ್ರಮವಾಗಿ, ಕ್ರಮ ಸಂಖ್ಯೆ 1717 ಹಾಗೂ ಕ್ರಮ ಸಂಖ್ಯೆ 2238ರಲ್ಲಿ ಪ್ರತಿಬಿಂಬಿತರಾಗಿದ್ದು, ಈ ಜೇಷ್ಠತೆಯನ್ನು ಗೊತ್ತುಪಡಿಸಿರುವ ಬಗ್ಗೆ ಶ್ರೀ ಸಿ.ಪಿ. ಪಾಟೀಲ್ ರವರು ಸರ್ಕಾರಕ್ಕೆ ಅರ್ಜಿ ಸಲ್ಲಿಸಿ, ತಾವು ಪರಿಶಿಷ್ಟ ವರ್ಗಕ್ಕೆ ಸೇರಿದವರಾಗಿದ್ದು, ದಿನಾಂಕ 10-1-1990ರಂದು ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-1) ವೃಂದಕ್ಕೆ ಪದೋನ್ನತಿ ಹೊಂದಿರುವುದಾಗಿ ತಿಳಿಸಿ, ದಿನಾಂಕ 3-12-1997 ರಂದು ಅಧಿಸೂಚನೆ ಸಂ. ಲೋಇ 209 ಸೇಸಎ 96 ರಲ್ಲಿ ಪ್ರಕಟಿಸಲಾದ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಯಲ್ಲಿ ತಮ್ಮ ಹೆಸರು ಕ್ರ.ಸಂ. 873 ರಲ್ಲೂ ಹಾಗೂ ತಮಗಿಂತ ಸೇವೆಯಲ್ಲಿ ಕಿರಿಯರಾದ ಶ್ರೀ ಚಂದ್ರಮೌಳಿ ನಾಯಕ್, ರವರ ಹೆಸರು ಕ್ರ. ಸಂ. 874 ರಲ್ಲಿ ಪ್ರತಿಬಿಂಬಿತವಾಗಿದ್ದು, ಈ ಜೇಷ್ಠತೆಯನುಸಾರ ತಮಗೆ ಕಾರ್ಯಪಾಲಕ ಇಂಜಿನಿಯರ್ ವೃಂದಕ್ಕೆ ದಿನಾಂಕ 26-2-99 ರಂದು ಪದೋನ್ನತಿ ನೀಡಲಾಗಿರುವುದಾಗಿ ತಿಳಿಸಿರುತ್ತಾರೆ. ಶ್ರೀ ಚಂದ್ರ ಮೌಳಿನಾಯಕ್ ರವರು ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಹಾಗೂ ಕಾರ್ಯಪಾಲಕ ಇಂಜಿನಿಯರ್ ವೃಂದಗಳಲ್ಲಿ ಬಡಪ್ಪನವರ ಪ್ರಕರಣದ ಪೂರ್ವದಲ್ಲಿ ತಮಗಿಂತ ಸೇವೆಯಲ್ಲಿ ಕಿರಿಯರಾಗಿರುತ್ತಾರೆ. ಈ ಮಧ್ಯೆ ಶ್ರೀ ಎಂ.ಜಿ. ಬಡಪ್ಪನವರ್ ಪ್ರಕರಣದಲ್ಲಿ ನೀಡಿದ ನಿರ್ದೇಶನದನ್ವಯ ತಮಗೆ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ವೃಂದಕ್ಕೆ ಹಿಂಬಡ್ತಿ ನೀಡಲಾಗಿತ್ತೆಂದೂ, ತದನಂತರ ಸಂವಿಧಾನದ 85 ನೇ ತಿದ್ದುಪಡಿಯನ್ವಯ ಪುನಃ ತಮಗೆ ಕಾರ್ಯಪಾಲಕ ಇಂಜಿನಿಯರ್ ವೃಂದಕ್ಕೆ ಪುನರ್ ಪದೋನ್ನತಿ ದಿನಾಂಕ 11-4-2002 ರಂದು ನೀಡಿದ್ದರೂ, ದಿನಾಂಕ 11-4-2002 ರಂದು ಪ್ರಕಟಿಸಿರುವ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-1) ಹಾಗೂ ಕಾರ್ಯಪಾಲಕ ಇಂಜಿನಿಯರ್ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಗಳಲ್ಲಿ ತಮಗಿಂತ ಸೇವೆಯಲ್ಲಿ ಕಿರಿಯರಾದ ಶ್ರೀ ಚಂದ್ರಮೌಳಿ ನಾಯಕ್ ರವರ ಹೆಸರನ್ನು ಅನುಕ್ರಮವಾಗಿ ಕ್ರ.ಸಂ.1436 ಹಾಗೂ 2064 ರಲ್ಲಿ ನಮೂದಿಸಿದ್ದು ತಮ್ಮ ಹೆಸರನ್ನು ಅನುಕ್ರಮವಾಗಿ ಕ್ರ.ಸಂ. 1717 ಹಾಗೂ 2238 ರಲ್ಲಿ ನಮೂದಿಸಿರುವುದರಿಂದ ತಮಗೆ ಜೇಷ್ಠತೆಯಲ್ಲಿ ವ್ಯತ್ಯಾಸವಾಗಿದ್ದು, ಇದರಿಂದ ಶ್ರೀ ಚಂದ್ರಮೌಳಿನಾಯಕ್ ರವರು ಈಗಾಗಲೇ ಅಧೀಕ್ಷಕ ಇಂಜಿನಿಯರ್ ವೃಂದಕ್ಕೆ ಪದೋನ್ನತಿ ಹೊಂದಿರುವುದಾಗಿ, ತಮಗೆ ಮಾತ್ರ ಈ ಪದೋನ್ನತಿ ಅವಕಾಶ ತಪ್ಪಿರುವುದಾಗಿ ತಿಳಿಸಿ ಅಧಿಸೂಚನೆ ಸಂ. ಲೋಇ 209 ಸೇಸಎ 96 ದಿನಾಂಕ 3-12-97 ರಲ್ಲಿ ಪ್ರಕಟಿಸಲಾಗಿದ್ದ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-1)ರ ಜೇಷ್ಠತಾ ಪಟ್ಟಿಗಳನ್ನು ಆಧರಿಸಿ, ತಮ್ಮ ಜೇಷ್ಠತೆಯನ್ನು ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-1) ಹಾಗೂ ಕಾರ್ಯಪಾಲಕ ಇಂಜಿನಿಯರ್ ವೃಂದಗಳಲ್ಲಿ ಪುನರ್ ನಿಗದಿಪಡಿಸಬೇಕೆಂದು ಕೋರಿರುತ್ತಾರೆ.

ಸರ್ಕಾರವು ಶ್ರೀ ಸಿ.ಪಿ. ಪಾಟೀಲ್, ರವರು ಸಲ್ಲಿಸಿರುವ ಮನವಿಯನ್ನು ಕೂಲಂಕುಷವಾಗಿ ಪರಿಶೀಲಿಸಿದೆ. ಭಾರತ ಸರ್ವೋಚ್ಚ ನ್ಯಾಯಾಲಯವು ಭಾರತ ಸಂವಿಧಾನದ 85ನೇ ತಿದ್ದುಪಡಿಯನ್ವಯ ಲಭ್ಯವಾಗಬಹುದಾದ ಎಲ್ಲಾ ಸೇವಾ ಸೌಲಭ್ಯಗಳನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಅಧಿಕಾರಿಗಳಿಗೆ ನೀಡಬೇಕೆಂದು ದಿನಾಂಕ 11-11-2002 ರ ಸ್ಪಷ್ಟೀಕರಣ ಆದೇಶದಲ್ಲಿ ಸ್ಪಷ್ಟ ನಿರ್ದೇಶನ ನೀಡಿದೆ. ಅಲ್ಲದೇ ಕರ್ನಾಟಕ ಸರ್ಕಾರವು ದಿನಾಂಕ 27-2-2002 ಮತ್ತು 28-2-2002 ರಂದು ಹೊರಡಿಸಿದ ಸುಗ್ರೀವಾಜ್ಞೆಗಳನ್ನು ಕರ್ನಾಟಕ (ರಾಜ್ಯದ ಸಿವಿಲ್ ಸೇವೆಗಳ ಹುದ್ದೆಗಳಿಗೆ) ಮೀಸಲಾಗಿ ಆಧಾರದ ಮೇಲೆ ಬಡ್ತಿ ಹೊಂದಿದ ಸರ್ಕಾರಿ ನೌಕರರ ಜ್ಯೇಷ್ಠತೆಯ ನಿರ್ಧಾರಣೆ ಅಧಿನಿಯಮ (2002ರ ಅಧಿನಿಯಮ ಸಂಖ್ಯೆ 10), ಎಂಬ ಅಧಿನಿಯಮವನ್ನಾಗಿ ಪರಿವರ್ತಿಸಿ ಆದೇಶ ಹೊರಡಿಸಿದೆ. ಈ ಅಧಿನಿಯಮದ ಪ್ರಕಾರ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಧಿಕಾರಿಗಳಿಗೆ ರೋಸ್ಟರ್ ಪದ್ಧತಿಯನ್ವಯ ಪಡೆದ ಬಡ್ತಿ ಸೌಲಭ್ಯವನ್ನು ಪುನರ್ ಸ್ಥಾಪಿಸಬೇಕಾಗಿದೆ. ಹಾಗಾಗಿ ಶ್ರೀ ಸಿ.ಪಿ. ಪಾಟೀಲ್, ರವರು ಪರಿಶಿಷ್ಟ ಪಂಗಡಕ್ಕೆ ಸೇರಿದ ಅಧಿಕಾರಿಯಾಗಿದ್ದು, ಶ್ರೀ ಚಂದ್ರಮೌಳಿನಾಯಕ್, ರವರಿಗಿಂತ, ಬಡಪ್ಪನವರ್ ಪ್ರಕರಣದ ಪೂರ್ವದಲ್ಲಿ ಎಲ್ಲಾ ವೃಂದಗಳಲ್ಲಿ ಹಿರಿಯರಾಗಿರುವುದರಿಂದ ಈ ಸೌಲಭ್ಯವನ್ನು ಪಡೆಯಲು ಅರ್ಹರಾಗಿರುತ್ತಾರೆ. ಅದ್ದರಿಂದ ಇವರಿಗಿಂತ ಸೇವಾ ಜೇಷ್ಠತೆಯಲ್ಲಿ ಕಿರಿಯರಾದ ಶ್ರೀ ಚಂದ್ರಮೌಳಿ ನಾಯಕ್, ರವರು ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-1) ಮತ್ತು ಕಾರ್ಯಪಾಲಕ ಇಂಜಿನಿಯರ್ ಹುದ್ದೆಗಳಿಗೆ ಪದೋನ್ನತಿ ಹೊಂದಿದ ದಿನಾಂಕವನ್ನು ಗಣನೆಗೆ ತೆಗೆದುಕೊಂಡು, ದಿನಾಂಕ 11-4-2002 ರಂದು ಪ್ರಕಟಿಸಲಾಗಿರುವ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-1) ಹಾಗೂ ಕಾರ್ಯಪಾಲಕ ಇಂಜಿನಿಯರ್ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಸೂಕ್ತ ಜೇಷ್ಠತೆಯನ್ನು ನಿಗದಿಪಡಿಸಲು ಉದ್ದೇಶಿಸಲಾಗಿದೆ. ಈ ಕ್ರಮವನ್ನು ಯಾವುದೇ ಪೂರ್ವ ನಿದರ್ಶನವಾಗಿ ಇಟ್ಟುಕೊಳ್ಳಬಾರದೆಂದು, ಒಂದು ವಿಶೇಷ ಸಂದರ್ಭವನ್ನಾಗಿ ಪರಿಗಣಿಸಿ, ಸರ್ವೋಚ್ಚನ್ಯಾಯಾಲಯವು ನೀಡುವ ಅಂತಿಮ ತೀರ್ಪಿಗೆ ಅನುಸಾರವಾಗಿ ಪುನರ್ ಪರಿಷ್ಕರಣೆಗೊಳಪಟ್ಟು, ಸರ್ಕಾರದ ಅಧಿಸೂಚನೆ ಸಂಖ್ಯೆ PWD 132 SAG 2002 ದಿನಾಂಕ 11.4.2002 ರಲ್ಲಿ ಪ್ರಕಟಿಸಲಾಗಿರುವ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-1) ಪದವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಕ್ರಮಸಂಖ್ಯೆ 1717ಕ್ಕೆ ಬದಲಾಗಿ ಕ್ರಮ ಸಂಖ್ಯೆ 1436A ನ್ನಾಗಿ ಹಾಗೂ ಸರ್ಕಾರದ ಅಧಿಸೂಚನೆ ಸಂ. PWD 84 SPG 2002 ದಿನಾಂಕ 11-4-2002 ರಲ್ಲಿ ಪ್ರಕಟಿಸಲಾಗಿರುವ ಕಾರ್ಯಪಾಲಕ ಇಂಜಿನಿಯರ್ ಪದವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಕ್ರಮಸಂಖ್ಯೆ 2238ಕ್ಕೆ ಬದಲಾಗಿ ಕ್ರಮ ಸಂಖ್ಯೆ 2064ಎ ನ್ನಾಗಿ ಸರ್ಕಾರದ ಅಧಿಸೂಚನೆ ಸಂ. ಲೋಇ 109 ಸೇಎಸು 2004 ದಿನಾಂಕ 6–9–2004ರಲ್ಲಿ ಸೇರ್ಪಡಿಸಲಾಗಿದ್ದು, ಈ ಸೇರ್ಪಡೆಯಿಂದ ಬಾಧಿತರಾಗುವ ಯಾವುದೇ ಅಧಿಕಾರಿಯು ತಮ್ಮ ಆಕ್ಷೇಪಣೆ ಸಲಹೆಗಳಿದ್ದಲ್ಲಿ ಅದನ್ನು ಸಮರ್ಥಿಸುವಂತಹ ದೃಢೀಕೃತ ದಾಖಲಾತಿಯೊಂದಿಗೆ ಈ ತಿದ್ದುಪಡಿ ದಿನಾಂಕದಿಂದ 15 ದಿನಗಳೊಳಗಾಗಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ ಬಹುಮಹಡಿಗಳ ಕಟ್ಟಡ, 5ನೇ ಮಹಡಿ, ಬೆಂಗಳೂರು ಇವರಿಗೆ ಸಲ್ಲಿಸುವಂತೆ ಕೋರಲಾಗಿತ್ತು.

ಈ ಸೇರ್ಪಡೆಗೆ ಸಂಬಂಧಿಸಿದಂತೆ ನಿಗದಿತ ಸಮಯದೊಳಗೆ ಯಾವುದೇ ಆಕ್ಷೇಪಣೆ: ಸಲಹೆಗಳನ್ನು ಸ್ವೀಕರಿಸಿರುವುದಿಲ್ಲ. ಆದ್ದರಿಂದ, ದಿನಾಂಕ 11–4–2002 ರಂದು ಹೊರಡಿಸಿರುವ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ–1) ರ ಹಾಗೂ ಕಾರ್ಯಪಾಲಕ ಇಂಜಿನಿಯರ್ ಪದವೃಂದದ ತಾತ್ಕಾಲಿಕ ಜೇಷ್ಟತಾ ಪಟ್ಟಿಗಳಲ್ಲಿ ಈ ಕೆಳಕಂಡಂತೆ ಸೇರ್ಪಡೆ ಮಾಡಿ ಅಂತಿಮಗೊಳಿಸಲಾಗಿದೆ. ಈ ಸೇರ್ಪಡೆಯು ಸಂವಿಧಾನ ಪೀಠದ ಮುಂದೆ ಬಾಕಿ ಇರುವ ರಿಟ್ ಅರ್ಜಿಗಳಲ್ಲಿ ನೀಡುವ ತೀರ್ಪಿಗನುಸಾರ ಪರಿಷ್ಕರಣೆ ಒಳಪಟ್ಟಿರುತ್ತದೆ.

**ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-1) ಪದವೃಂದದ ದಿನಾಂಕ 11-4-2002 ರ ಜೇಷ್ಠತಾ ಪಟ್ಟಿಯಲ್ಲಿ**

| AEE Grd. No. | List No | AE Grd No. | Petition No. | Name of the Engineer | SC/ ST | Date of Birth | AEE Promotion date | Eligibility Date | Remarks |
|---|---|---|---|---|---|---|---|---|---|
| 1436A | 2 | 3099 | | Patil C.P. | ST | 04/01/52 | 16/10/1990 | 02/03/1990 | |

**ಕಾರ್ಯಪಾಲಕ ಇಂಜಿನಿಯರ್ ಪದವೃಂದದ ದಿನಾಂಕ 11-4-2002ರ ಜೇಷ್ಠತಾ ಪಟ್ಟಿಯಲ್ಲಿ**

| Sl. No. | List No | AE Grd No. | Name of the Engineer | SC/ ST | Date of Birth | Date of Promotion | Eligibility Date | Remarks |
|---|---|---|---|---|---|---|---|---|
| 2064A | 2 | 3099 | Patil C.P. | ST | 04/01/52 | 26/02/1999 | 26/02/1999 | |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿ. ಬಸವರಾಜು**

PR-1230

**ಸರ್ಕಾರದ ಅಧೀನ ಕಾರ್ಯದರ್ಶಿ**

ಲೋಕೋಪಯೋಗಿ ಇಲಾಖೆ, (ಸೇವೆಗಳು-ಎ)

## ಶಿಕ್ಷಣ ಸಚಿವಾಲಯ

**ವಿಷಯ:** ಶ್ರೀ ಕೆ.ಜಿ.ಹನುಮಂತಪ್ಪ, ಹಿರಿಯ ಉಪನ್ಯಾಸಕರಾಗಿ ಡಯಟ್ ಬೀದರ್‌ಗೆ ವರ್ಗಾವಣೆ ಆದೇಶದಲ್ಲಿರುವವರು – ಇವರನ್ನು ಅಮಾನತ್ತಿನಲ್ಲಿಡುವ ಬಗ್ಗೆ.

**ಓದಲಾಗಿದೆ:** 1. ದಿ: 16.1.2004, ಸರ್ಕಾರಿ ಅಧಿಸೂಚನೆ ಸಂ:ಇಡಿ 654 ಡಿಪಿಐ 2003

2. ದಿನಾಂಕ:12.7.2004 ರ ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರ ಪತ್ರ ಸಂಖ್ಯೆ:ಸಿ1(1) ವರ್ಗಾವಣೆ.21:02–03.

**ಪ್ರಸ್ತಾವನೆ:**

ಶ್ರೀ ಕೆ.ಜಿ.ಹನುಮಂತಪ್ಪ, ಶಿಕ್ಷಣಾಧಿಕಾರಿ, ಉಪನಿರ್ದೇಶಕರ ಕಚೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು, ಇವರನ್ನು ಮೇಲೆ ಓದಲಾದ ಕ್ರಮ ಸಂಖ್ಯೆ:(1) ರ ದಿನಾಂಕ:16.1.2004 ರ ಸರ್ಕಾರಿ ಆದೇಶದಲ್ಲಿ ಬೀದರ್, ಡಯಟ್ ಇಲ್ಲಿನ ಹಿರಿಯ ಉಪನ್ಯಾಸಕರ ಹುದ್ದೆಗೆ ವರ್ಗಾಯಿಸಿ ನೇಮಿಸಲಾಗಿತ್ತು. ಆದರೆ ವರ್ಗಾವಣೆ ಆದ ಸ್ಥಳದಲ್ಲಿ ಅವರು ಕರ್ತವ್ಯಕ್ಕೆ ಹಾಜರಾಗದೆ ಅಲ್ಲಿಯೇ ಮುಂದುವರೆದರು. ಚುನಾವಣಾ ನೀತಿ ಸಂಹಿತೆ ಅವಧಿ ಅಂತ್ಯಗೊಂಡ ಹಿನ್ನಲೆಯಲ್ಲಿ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ದಕ್ಷಿಣ ಕನ್ನಡ ಜಿಲ್ಲೆ, ಇವರು ಸದರಿಯವರನ್ನು ದಿನಾಂಕ:15.5.2004 ರಲ್ಲಿ ಕರ್ತವ್ಯದಿಂದ ಬಿಡುಗಡೆ ಮಾಡಿರುತ್ತಾರೆ. ತದನಂತರ ವರ್ಗಾವಣೆ ಸಂಬಂಧ ಕೆಎಟಿ ಅರ್ಜಿ ಸಂಖ್ಯೆ:3075/2004 ರ ದಿನಾಂಕ:25.5.2004 ರನ್ವಯ ದಾವೆ ಹೂಡಿದ್ದು, ಸದರಿ ಹುದ್ದೆಯಲ್ಲಿ ಮುಂದುವರೆಯಲು ಕೆಎಟಿ ತೀರ್ಪಿನನ್ವಯ ಆದೇಶವಾದ ದಿನಾಂಕದಿಂದ 4 ವಾರಗಳ ಗಡುವು ನೀಡಿದ್ದರಿಂದ, ಸದರಿ ಗಡುವು ಮುಗಿದ ನಂತರ ಅಂದರೆ ದಿ:23.6.2004 ರಂದು ಉಪನಿರ್ದೇಶಕರು, (ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು, ಇವರು ಕರ್ತವ್ಯದಿಂದ ಬಿಡುಗಡೆ ಮಾಡಿರುತ್ತಾರೆ. ಇವರು ವರ್ಗಾವಣೆಯಾಗಿದ್ದು, ಕೆಎಟಿ ಆದೇಶದಲ್ಲಿ ನೀಡಿದ್ದ 4 ವಾರಗಳ ತಡೆಯಾಜ್ಞೆಯ ಅವಧಿ ಮುಗಿದ ನಂತರವೂ ಸಹ ವರ್ಗಾವಣೆಯಾದ ಸ್ಥಳದಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುವುದಿಲ್ಲವೆಂದು, ಮೇಲೆ 2 ರಲ್ಲಿ ಉಲ್ಲೇಖಿಸಿದ ದಿನಾಂಕ:12.7.2004 ರ ಪತ್ರದಲ್ಲಿ ಆಯುಕ್ತರು ತಿಳಿಸಿದ್ದು, ಕೆಳಕಂಡ ಕಾರಣಗಳಿಗಾಗಿ ಶ್ರೀ ಹನುಮಂತಪ್ಪ ಅವರನ್ನು ಮಂಗಳೂರಿನಲ್ಲಿ ಮುಂದುವರೆಸುವುದು ಸೂಕ್ತವಲ್ಲವೆಂದು ಆಯುಕ್ತರು ಅಭಿಪ್ರಾಯ ಪಟ್ಟಿರುತ್ತಾರೆ.

1. ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀಮತಿ ವಿಮಲಾಗೌಡ ರವರು ಈ ಅಧಿಕಾರಿ ಮಹಿಳಾ ಶಿಕ್ಷಕರುಗಳೊಂದಿಗೆ ಅಸಭ್ಯತೆಯಿಂದ ವರ್ತಿಸುವುದರ ಜೊತೆಗೆ ವಿವಿಧ ಆರೋಪಗಳು ಇರುವುದರಿಂದ ಬೇರೆ ಕಡೆಗೆ ವರ್ಗಾಯಿಸುವಂತೆ ಕೋರಿರುತ್ತಾರೆ.
2. ಶ್ರೀ ಕೆ.ಜಿ.ಹನುಮಂತಪ್ಪ, ಇವರ ಮೇಲಿನ ಆರೋಪಗಳ ಬಗ್ಗೆ ವಿಚಾರಣೆ ನಡೆಸಿ ವರದಿ ಸಲ್ಲಿಸಲು ಶ್ರೀ ಉಮೇಶ್ ಶೆಟ್ಟಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯಾಗಿ ಹಾಗೂ ಪ್ರಾಂಶುಪಾಲರು, ಡಯಟ್ ಮಂಗಳೂರು, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಿ ಸರ್ಕಾರವು ದಿ: 3.1.2004 ರಲ್ಲಿ ವಿಚಾರಣಾ ಪ್ರಾಧಿಕಾರ ರಚಿಸಿರುತ್ತಾರೆ.
3. ಸದರಿಯವರ ವಿರುದ್ಧ ಆರೋಪಗಳ ಬಗ್ಗೆ ವಿಚಾರಣೆ ನಡೆಸಿ **"ದಕ್ಷಿಣ ಕನ್ನಡ ಜಿಲ್ಲಾ ಮಹಿಳಾ ಲೈಂಗಿಕ ಕಿರುಕುಳ ದೂರು ನಿವಾರಣಾ ಸಮಿತಿ"** ಸಹ ವರದಿ ಸಲ್ಲಿಸಿದ್ದು, ಆಪಾದನೆಗಳಲ್ಲಿ ನಿಜಾಂಶವಿರುವುದಾಗಿ ತಿಳಿಸಿರುತ್ತಾರೆ.

ಶ್ರೀ ಹನುಮಂತಪ್ಪ ಇವರು ವರ್ಗಾವಣೆಯಾದ ಸ್ಥಳದಲ್ಲಿ ಕೆಲಸಕ್ಕೆ ಹಾಜರಾಗದಿರುವುದೂ ಸೇರಿದಂತೆ ನೌಕರರಿಗೆ ತರವಲ್ಲದ ರೀತಿಯಲ್ಲಿ ವರ್ತಿಸಿ, ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿಗಳು, 1966 ರ ನಿಯಮ 3 ನ್ನು ಉಲ್ಲಂಘಿಸಿರುತ್ತಾರೆ.

ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರು ಸಲ್ಲಿಸಿರುವ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಇವರ ಮೇಲಿನ ಆರೋಪಗಳ ಬಗ್ಗೆ ಶಿಸ್ತು ಕ್ರಮ ಕಾಯ್ದಿರಿಸಿ, ಸೇವೆಯಿಂದ ಅಮಾನತ್ತಿನಲ್ಲಿಡಲು ನಿರ್ಧರಿಸಿ, ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ 124 ಡಿಜಿಡಿ 2004 ಬೆಂಗಳೂರು, ದಿನಾಂಕ 5ನೇ ನವೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಶ್ರೀ ಕೆ.ಜಿ.ಹನುಮಂತಪ್ಪ, ಬೀದರ್‌ನ ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆಗೆ ಉಪನ್ಯಾಸಕರಾಗಿ ವರ್ಗಾವಣೆ ಆದೇಶದಲ್ಲಿ ಇರುವವರು, ಇವರ ಮೇಲಿನ ಆರೋಪಗಳಿಗೆ ಸಂಬಂಧಿಸಿದಂತೆ ಶಿಸ್ತು ಕ್ರಮ ಕಾಯ್ದಿರಿಸಿ, ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957 ರ ನಿಯಮ 10(1) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಶ್ರೀ ಕೆ.ಜಿ.ಹನುಮಂತಪ್ಪ ಅವರನ್ನು ಅಮಾನತ್ತಿನಲ್ಲಿರಿಸಿದೆ.

2. ಶ್ರೀ ಕೆ.ಜಿ.ಹನುಮಂತಪ್ಪ, ಇವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98 ರ ಮೇರೆಗೆ ಜೀವನಾಧಾರ ಭತ್ಯೆ ಪಡೆಯಲು ಅರ್ಹರು ಹಾಗೂ ಅಮಾನತ್ತಿನ ಅವಧಿಯಲ್ಲಿ ಶಿಸ್ತು ಪ್ರಾಧಿಕಾರಿಯಾದ ಸರ್ಕಾರದ ಪೂರ್ವಾನುಮತಿ ಇಲ್ಲದೆ ಕೇಂದ್ರಸ್ಥಾನ ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಫ್.ಆರ್. ಸಂಬರಗಿ**

ಪಿ.ಆರ್. 1231

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ. (ಸೇ–1,2)

**ವಿಷಯ:** ಶ್ರೀ ಉದ್ದಿಪ್ರಭು, ಪ್ರಾಂಶುಪಾಲರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ದಾವಣಗೆರೆ,(ಹಿಂದಿನ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ,ಕೊಪ್ಪಳ) ಇವರ ಮೇಲಿನ ಆರೋಪಗಳಿಗೆ ಶಿಸ್ತು ಕ್ರಮ–ಅಂತಿಮ ಆದೇಶ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂ:ಇಡಿ 96 ಡಿಜಿಡಿ 2001 ದಿ:19.9.2002 ಹಾಗೂ ಅಧಿಸೂಚನೆ ದಿನಾಂಕ:17.1.2004
2. ಸೂಚನಾ ಪತ್ರ ಸಂ:ಇಡಿ 96 ಡಿಜಿಡಿ 2001 ದಿ:16.9.2002
3. ಶ್ರೀ ಉದ್ದಿಪ್ರಭು ಇವರ ಪ್ರತಿರಕ್ಷಣಾ ಹೇಳಿಕೆ ದಿ:4.12.2002
4. ಸರ್ಕಾರಿ ಆದೇಶ ಸಂ:ಇಡಿ 96 ಡಿಜಿಡಿ 2001 ದಿ:8.1.2003
5. ನಿರ್ದೇಶಕರು, (ಪ್ರಾಥಮಿಕ ಶಿಕ್ಷಣ) ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಹಾಗೂ ವಿಚಾರಣಾಧಿಕಾರಿ, ಇವರ ವಿಚಾರಣಾ ವರದಿ ಸಂ: ನಿಪ್ರಾಶಿ:ಆಶಾ:ಸಿಸಿಎ:ಇವಿ.1:2002–03 ದಿ:1.10.2003
6. ಎರಡನೇ ಕಾರಣ ಕೇಳುವ ನೋಟೀಸ್ ಸಂ:ಇಡಿ 96 ಡಿಜಿಡಿ 2001 (ಭಾಗ–2) ದಿನಾಂಕ:28.11.2003
7. ಶ್ರೀ ಉದ್ದಿಪ್ರಭು ಇವರ ಪ್ರತಿರಕ್ಷಣಾ ಹೇಳಿಕೆ ದಿ:1.1.2004

**ಪ್ರಸ್ತಾವನೆ:**

ಶ್ರೀ ಉದ್ದಿಪ್ರಭು, ಪ್ರಾಂಶುಪಾಲರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ದಾವಣಗೆರೆ, ಇವರು ಈ ಹಿಂದೆ ಕೊಪ್ಪಳ ಜಿಲ್ಲೆಯ ಸಾರ್ವಜನಿಕ ಶಿಕ್ಷಣ ಇಲಾಖಾ ಉಪನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ದಿನಾಂಕ:17.3.1999 ರಂದು ಅಧ್ಯಕ್ಷರು, ಖರೀದಿ ಸಮಿತಿ, ಹಾಗೂ ಅಧ್ಯಕ್ಷರು, ಜಿಲ್ಲಾ ಪಂಚಾಯತ್, ಕೊಪ್ಪಳ, ಇವರ ನೇತೃತ್ವದಲ್ಲಿ ನಡೆದ ಸಭೆಯಲ್ಲಿ ಶಿಕ್ಷಣ ಇಲಾಖೆಯ ಕೊಪ್ಪಳ ಉಪನಿರ್ದೇಶಕರ ಕಚೇರಿಗೆ ಸಂಬಂಧಿಸಿದಂತೆ ವಸ್ತುಗಳ ಖರೀದಿಗೆ ಅನುಮೋದನೆ ನೀಡುತ್ತಾ, ವಸ್ತುಗಳನ್ನು ಕೆ.ಎಸ್.ಐ.ಎಂ.ಸಿ. ಅಥವಾ ಇನ್ಯಾವುದೇ ಸಂಸ್ಥೆಗಳು ಸರಬರಾಜು ಮಾಡುವ ವಸ್ತುಗಳ ಗುಣಮಟ್ಟವನ್ನು ಕಾಯ್ದುಕೊಳ್ಳುವುದು ಅನುಷ್ಠಾನಾಧಿಕಾರಿಗಳ ಜವಾಬ್ದಾರಿಯನ್ನಾಗಿ ನಿಗದಿಪಡಿಸಿ, ಒಂದು ಪಕ್ಷ ಕಳಪೆ ಗುಣಮಟ್ಟದ ಸಾಮಗ್ರಿಗಳನ್ನು ಒಪ್ಪಿ ಅದನ್ನು ಪಡೆದಲ್ಲಿ ಅಂತಹ ನಿಯಮಬಾಹಿರ ಕ್ರಮಗಳಿಗೆ ಅನುಷ್ಠಾನಾಧಿಕಾರಿಯ ಜವಾಬ್ದಾರರಾಗುತ್ತಾರೆಂದು ಸ್ಪಷ್ಟಪಡಿಸಿತ್ತು. ಆದರೆ ಉಪನಿರ್ದೇಶಕರಾಗಿದ್ದ ಶ್ರೀ ಉದ್ದಿಪ್ರಭು ಇವರು ಸಾಮಗ್ರಿಗಳ ಸರಬರಾಜಿಗಾಗಿ ಆದೇಶವನ್ನು ಕೊಪ್ಪಳ ಜಿಲ್ಲೆಯ ವ್ಯಾಪ್ತಿಗೆ ಬರುವ ಕೆ.ಎಸ್.ಐ.ಎಂ.ಸಿ. ರಾಯಚೂರು, ಇವರಿಗೆ ನೀಡುವ ಬದಲಿಗೆ ಸಿದ್ಧ ಉಡುಪುಗಳು ಹಾಗೂ ಹೊಸೈರಿ ಉತ್ಪಾದನೆಗಳಿಗೆಂದು ಮಾನ್ಯತೆ ರಿಜಿಸ್ಟ್ರೇಷನ್ ಹೊಂದಿದ್ದ ಹಾಗೂ ಎಲೆಕ್ಟ್ರಾನಿಕ್ಸ್ ವಸ್ತುಗಳ ಉತ್ಪಾದನೆಗೆ ನೊಂದಣಿ ಮಾನ್ಯತೆ ಹೊಂದಿಲ್ಲದ ಮೆ:ರುಷಿ ಎಂಟರ್ ಪ್ರೈಸಸ್, ಗುಲ್ಬರ್ಗಾ, ಇವರಿಗೆ ನೇರವಾಗಿ ದಿ:27.3.1999 ರಂದು ಜಿಲ್ಲಾ ಪಂಚಾಯತ್, ಕೊಪ್ಪಳ, ಕಾರ್ಯಾಲಯದಿಂದ ಅನುಮೋದನೆ ಹಾಗೂ ಆಡಳಿತಾತ್ಮಕ ಮಂಜೂರಾತಿ ದೊರಕುವ ಮುನ್ನವೇ ಆದೇಶವನ್ನು ನೀಡಿ, ಕೆಳಕಂಡ ಸಾಮಗ್ರಿಗಳನ್ನು ಎಲೆಕ್ಟ್ರಾನಿಕ್ಸ್ ವಸ್ತುಗಳ ಉತ್ಪಾದನೆಗೆ ಮಾನ್ಯತೆ ಹೊಂದಿಲ್ಲದ ಸಂಸ್ಥೆಯಿಂದ ನಿಯಮಬಾಹಿರವಾಗಿ ಮಾರುಕಟ್ಟೆ ದರಕ್ಕಿಂತ ರೂ.2,42,233/–ಗಳನ್ನು ಹೆಚ್ಚುವರಿಯಾಗಿ ಪಾವತಿಸುವ ಮೂಲಕ ಸದರಿಯವರು ಸರ್ಕಾರಿ ಹಣ ದುರುಪಯೋಗಪಡಿಸಿಕೊಳ್ಳಲು ನೇರ ಕಾರಣರಾಗಿದ್ದ ಆರೋಪದ ಮೇರೆಗೆ ಮೇಲೆ ಓದಲಾದ ಕ್ರಮಾಂಕ (1) ರ ದಿನಾಂಕ:19.9.2002 ರ ಆದೇಶದ ಮೂಲಕ ವಿಚಾರಣೆ ಕಾಯ್ದಿರಿಸಿ ಅಮಾನತ್ತಿನಲ್ಲಿಟ್ಟು, ತದನಂತರ ದಿನಾಂಕ:17.1.2004 ರ ಅಧಿಸೂಚನೆಯಲ್ಲಿ ವಿಚಾರಣೆ ಕಾಯ್ದಿರಿಸಿ, ಅಮಾನತ್ತು ತೆರವು ಮಾಡಿ ಸ್ಥಳನಿಯುಕ್ತಿಗೊಳಿಸಲಾಗಿತ್ತು. ಹಾಗೂ ಮೇಲೆ ಓದಲಾದ ಕ್ರಮಾಂಕ (2) ರ ದಿನಾಂಕ:16.9.2002 ರಂದು ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957 ರ ನಿಯಮ 11 ರಡಿಯಲ್ಲಿ ಆರೋಪಣಾ ಪಟ್ಟಿಯನ್ನು ಸೂಚನಾ ಪತ್ರದ ಮೂಲಕ ಜಾರಿಗೊಳಿಸಿ ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಲು 15 ದಿವಸಗಳ ಕಾಲಾವಕಾಶ ನೀಡಲಾಗಿತ್ತು.

| ಕ್ರ.. ಸಂ | ಸಾಧನ ಸಾಮಗ್ರಿಗಳ ಹೆಸರು | ಮಾರ್ಚ 1999 ರಲ್ಲಿ ಈ ಸಾಮಗ್ರಿಗಳ ಮಾರುಕಟ್ಟೆ ಬೆಲೆ (ತೆರಿಗೆ ಸೇರಿದಂತೆ) ರೂ. | ಖರೀದಿಸಿದ ಬೆಲೆ ರೂ. | ಹೆಚ್ಚುವರಿಯಾಗಿ ಪಾವತಿಸಿದ ಮೊತ್ತ ರೂ. | ಮಾರ್ಚ 1999 ರ ದರದಂತೆ ಶೇ. ಹೆಚ್ಚುವರಿ ಪಾವತಿ ಮಾಡಿದ್ದು |
|---|---|---|---|---|---|
| 1. | HCL Computer with printer | 48,250.00 | 99,850.00 | 51,600.00 | 112 % |
| 2. | HCL Computer with printer | 57,000.00 | 1,37,680.00 | 80,680.00 | 142 % |
| 3. | UPS ಫೋಬಸ್ ಫೊರ್ ಸ್ಟೈಟ್ IKVA | 15,000.00 | 54,750.00 | 39.750.00 | 294 % |
| 4. | Modi Xerox-5216 | 1,02,000.00 | 1,30,000.00 | 28,000.00 | 338 % |
| 5. | Modi Fax-7241 | 19,227.00 | 33,600.00 | 14,373.00 | 27 % |
| 6. | TVS Printer | 10,000.00 | 37,830.00 | 27,830.00 | 74 % |
| | | | Total | **2,42,233.00** | |

ಮಾರುಕಟ್ಟೆ ದರವನ್ನು ಹೇಗೆ ನಿರ್ಣಯಿಸಲಾಗಿದೆ ಎಂಬುದನ್ನು ಮಹಾಲೇಖಪಾಲರ ವಿಶೇಷ ಆಡಿಟ್ ವರದಿಯಲ್ಲಿ ಹೇಳಲಾಗಿದೆ. ಇದನ್ನು ಆರೋಪಣಾ ಪಟ್ಟಿಯ ಅನುಬಂಧ–3ರ ಕ್ರಮ ಸಂಖ್ಯೆ 5ರಲ್ಲಿ ಉಲ್ಲೇಖಿಸಲಾಗಿದೆ. ಮೇಲಿನ ಟೇಬಲ್‌ನಲ್ಲಿ ಹೇಳಿದ ಕ್ರಮ ಸಂಖ್ಯೆ: 3 ರಲ್ಲಿ ತೋರಿಸಿರುವ ಟಿ.ವಿ.ಎಸ್. ಪ್ರಿಂಟರ್ ಅನ್ನು ಖರೀದಿಸಿರುವುದಿಲ್ಲ ಹಾಗೂ ಹಣ ಪಾವತಿಸಿರುವುದಿಲ್ಲ. ಇದರಿಂದ ಸರ್ಕಾರಕ್ಕೆ ರೂ.27,830/– ನಷ್ಟವಾಗಿರುವುದಿಲ್ಲ ಎಂದು ಮಂಡನಾಧಿಕಾರಿಗಳು ಹೇಳಿರುವುದನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯ ಪುಟ–2 ರಲ್ಲಿನ ಟೇಬಲ್ ಕೆಳಗೆ ನಮೂದಿಸಿದ್ದಾರೆ.

2. ಆಪಾದಿತರಾದ, ಶ್ರೀ ಉದ್ದಿಪ್ರಭು ಇವರು ಮೇಲೆ ಓದಲಾದ ಕ್ರಮಾಂಕ (3) ರ ದಿನಾಂಕ:4.12.2002 ರ ಪತ್ರದ ಮೂಲಕ ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಿ, ತಮ್ಮ ಮೇಲಿನ ಆರೋಪಗಳನ್ನು ಅಲ್ಲಗಳೆದಿದ್ದರು. ಪ್ರತಿರಕ್ಷಣಾ ಹೇಳಿಕೆಯಲ್ಲಿನ ಅಂಶಗಳನ್ನು ಪರಿಶೀಲಿಸಿದ ನಂತರ ವಿವರವಾದ ವಿಚಾರಣೆ ನಡೆಸುವುದು ಸೂಕ್ತವೆಂದು ಸರ್ಕಾರವು ನಿರ್ಧಾರ ಕೈಗೊಂಡು ಅದರಂತೆ ಮೇಲೆ ಓದಲಾದ ಕ್ರಮಾಂಕ (4) ರ ದಿನಾಂಕ:8.1.2003 ರ ಸರ್ಕಾರಿ ಆದೇಶದ ಮೂಲಕ ಪ್ರಕರಣದ ಬಗ್ಗೆ ವಿಚಾರಣೆ ನಡೆಸಲು ನಿರ್ದೇಶಕರು, (ಪ್ರಾಥಮಿಕ ಶಿಕ್ಷಣ) ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರನ್ನು ವಿಚಾರಣಾಧಿಕಾರಿಯನ್ನಾಗಿಯೂ ಹಾಗೂ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಕೊಪ್ಪಳ, ಇವರನ್ನು ಮಂಡನಾಧಿಕಾರಿಯಾಗಿಯೂ ನೇಮಕ ಮಾಡಿ ಆದೇಶಿಸಲಾಗಿತ್ತು.

3. ವಿಚಾರಣಾಧಿಕಾರಿಗಳು ಮೇಲೆ ಓದಲಾದ ಕ್ರಮಾಂಕ (5) ರ ದಿನಾಂಕ:1.10.2003 ರಂದು ಆಪಾದಿತರ ಮೇಲಿನ ಪ್ರತಿಯೊಂದು ಆರೋಪಗಳಿಗೆ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಸಲ್ಲಿಸಿದ್ದಾರೆ. ವಿಚಾರಣಾ ವರದಿಯಲ್ಲಿನ ನಿರ್ಣಯದಂತೆ ಆಪಾದಿತರ ಮೇಲಿನ ಆರೋಪವು ಸಾಬೀತಾಗಿದೆ. ವಿಚಾರಣಾ ವರದಿಯನ್ನು 2ನೇ ಕಾರಣ ಕೇಳುವ ನೋಟೀಸ್ ಮೂಲಕ ಮೇಲೆ ಓದಲಾದ ಕ್ರಮಾಂಕ (6) ರ ದಿನಾಂಕ:28.11.2003 ರಂದು ಜಾರಿಗೊಳಿಸಿ ವಿಚಾರಣಾ ವರದಿಯಲ್ಲಿನ ನಿರ್ಣಯದ ಮೇಲೆ ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಲು ಆಪಾದಿತರಿಗೆ ಕಾಲಾವಕಾಶ ನೀಡಲಾಗಿತ್ತು. ಸದರಿಯವರು ದಿನಾಂಕ:1.1.2004 ರಂದು ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಿ ವಿಚಾರಣಾ ವರದಿಯಲ್ಲಿನ ನಿರ್ಣಯವನ್ನು ಸಂಪೂರ್ಣವಾಗಿ ಅಲ್ಲಗಳೆದಿದ್ದಾರೆ.

4. ವಿಚಾರಣಾ ವರದಿಯಲ್ಲಿನ ನಿರ್ಣಯ ಹಾಗೂ ದಾಖಲಾತಿಗಳನ್ನು ಕೂಲಂಕಷವಾಗಿ ಪರಿಶೀಲಿಸಿದಾಗ ಆಪಾದಿತರಾದ ಶ್ರೀ ಉದ್ದಿಪ್ರಭು, ಇವರು HCL Computer without printer, HCL Computer with printer, UPS Modi Xerox-5216 and Modi Fax-7241 ಯಂತ್ರ– ಇವುಗಳನ್ನು ಸಿದ್ಧ ಉಡುಪು ಸರಬರಾಜಿಗೆ ಕೆ.ಎಸ್.ಐ.ಎಂ.ಸಿ. ಇಂದ ರಿಜಿಸ್ಟ್ರೇಷನ್ ಪಡೆದುಕೊಂಡ proprietry ಸಂಸ್ಥೆಯಾದ ರುಷಿ ಎಂಟರ್ ಪ್ರೈಸಸ್ ಅವರಿಂದ ಖರೀದಿಸಿದ್ದಾರೆ. ಈ ಖರೀದಿಯನ್ನು ಕೆ.ಎಸ್.ಐ.ಎಂ.ಸಿ. ಮೂಲಕ ಮಾಡಿರುವುದಿಲ್ಲ, ಉಪನಿರ್ದೇಶಕರು ನೇರವಾಗಿ ರುಷಿ ಎಂಟರ್ ಪ್ರೈಸಸ್ ಅವರಿಗೆ ಆದೇಶ ನೀಡಿ, ಕೆ.ಎಸ್.ಐ.ಎಂ.ಸಿ ಯ ಗುಲ್ಬರ್ಗಾ ಬ್ರಾಂಚ್ ಮ್ಯಾನೇಜರ್ ಅವರೊಂದಿಗೆ ಶಾಮೀಲಾಗಿ ಸದರಿ ಬ್ರಾಂಚ್ ಮುಖಾಂತರ ವ್ಯವಹಾರ ನಡೆದಿದೆ ಎನ್ನುವಂತೆ ಖೊಟ್ಟೆ ದಾಖಲೆಗಳನ್ನು ಸೃಜಿಸಿದ್ದಾರೆ. ಆದುದರಿಂದ ಶ್ರೀ ಉದ್ದಿಪ್ರಭು ಇವರ ಮೇಲಿನ ಆರೋಪ ಸಾಬೀತಾಗಿದೆ. ವಿಚಾರಣಾ ವರದಿಯನ್ನು ಸರ್ಕಾರವು ಒಪ್ಪಿದೆ. ಈ ರೀತಿ ನಿಯಮಬಾಹಿರವಾಗಿ 5 ಐಟಂಗಳ ರೂ.4,55,880/– ರ ವೆಚ್ಚದಲ್ಲಿ ಖರೀದಿಸಿ; ಮಾರುಕಟ್ಟೆ ದರಕ್ಕಿಂತ ರೂ.2,14,403 ನ್ನು ಹೆಚ್ಚಿಗೆ ಪಾವತಿ ಮಾಡಲಾಗಿದೆ. ಸದರಿಯವರು ಮಾಡಿರುವ 5 ಐಟಂಗಳ ಖರೀದಿ ಕಾನೂನು ಬಾಹಿರವಾಗಿರುವುದರಿಂದ, ಒಟ್ಟು ಖರೀದಿ ಮೊತ್ತವಾದ ರೂ.4,55,880/– (ನಾಲ್ಕು ಲಕ್ಷದ ಐವತ್ತೈದು ಸಾವಿರದ ಎಂಟುನೂರ ಎಂಬತ್ತು) ಅನ್ನು ಅವರ ಸಂಬಳದಿಂದ:ನಿವೃತ್ತಿ ಸೌಲಭ್ಯಗಳಿಂದ ವಸೂಲಿ ಮಾಡಬೇಕಾಗಿದ್ದು, ಈ ಐದು ಐಟಂಗಳಿಗೆ ಸ್ವೀಕೃತಿ ಕೊಡಲಾಗಿದೆ ಎಂದು ವಿಚಾರಣಾಧಿಕಾರಿಯವರು ವಿಚಾರಣಾ ನಿರ್ಣಯದಲ್ಲಿ ತಿಳಿಸಿರುವುದರಿಂದ, ಸದರಿ 5 ಐಟಂಗಳು ಇಲಾಖೆಗೆ ಬಂದಿದೆ ಎಂದು ಭಾವಿಸಿ, ಸದರಿ ಖರೀದಿ ಮೊತ್ತದ ಮೇಲೆ ಬಡ್ಡಿ ವಸೂಲು ಮಾಡುವುದನ್ನು ಕೈಬಿಡಬಹುದಾಗಿದೆ ಎಂದು ಸರ್ಕಾರವು ನಿರ್ಧಾರ ಕೈಗೊಂಡಿದೆ ಹಾಗೂ ಮೇಲೆ ತಿಳಿಸಲಾದ ರೂ.4,55,880/–ಗಳನ್ನು ವಸೂಲಿ ಮಾಡಲಾಗದೆ ಯಾವುದಾದರೂ ಮೊತ್ತ ಉಳಿದಲ್ಲಿ ಅಂತಹ ಮೊತ್ತದ ವಸೂಲಾತಿಗೆ ಸಾರ್ವಜನಿಕ ಶಿಕ್ಷಣ ಇಲಾಖಾ ಆಯುಕ್ತರು ಸಿವಿಲ್ ಸೂಟ್ ದಾಖಲಿಸಿ, ವಸೂಲಿ ಮಾಡಲು ಹಾಗೂ ಶ್ರೀ ಉದ್ದಿಪ್ರಭು ಅವರನ್ನು ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957 ರ ನಿಯಮ 8(vi) ರಡಿ **ಕಡ್ಡಾಯ ನಿವೃತ್ತಿಗೊಳಿಸುವ** ದಂಡನೆಯನ್ನು ವಿಧಿಸಲು ಸರ್ಕಾರವು ಪ್ರಸ್ತಾಪಿಸಿದ್ದು, ಸದರಿ ಪ್ರಸ್ತಾವನೆಗಳಿಗೆ ಕರ್ನಾಟಕ ಲೋಕಸೇವಾ ಆಯೋಗವು ದಿ:24.8.2004 ಸಂಖ್ಯೆ:ಪಿಎಸ್‌ಸಿ 61.ಸಿಐಎಸ್‌ಎಸ್ 2004 ರ ಪತ್ರದ ಮೂಲಕ ತನ್ನ ಸಹಮತಿ ನೀಡಿದೆ. ಆದ್ದರಿಂದ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಇಡಿ 96 ಡಿಜಿಡಿ 2001 ಬೆಂಗಳೂರು, ದಿನಾಂಕ: 05ನೇ ನವೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನಲೆಯಲ್ಲಿ ಶ್ರೀ ಉದ್ದಿಪ್ರಭು, ಪ್ರಾಂಶುಪಾಲರು, (ಸಾರ್ವಜನಿಕ ಶಿಕ್ಷಣ ಇಲಾಖಾ ಉಪನಿರ್ದೇಶಕರ ವೃಂದ) ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ದಾವಣಗೆರೆ, ಇವರನ್ನು ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957 ರ ನಿಯಮ 8(vi) ರಂತೆ ತಕ್ಷಣದಿಂದ ಜಾರಿಗೆ ಬರುವಂತೆ **"ಕಡ್ಡಾಯ ನಿವೃತ್ತಿ"** ಗೊಳಿಸಿ ಆದೇಶಿಸಿದೆ. ಹಾಗೂ ಕಾನೂನುಬಾಹಿರವಾಗಿ 5 ಸಾಧನ ಸಾಮಗ್ರಿಗಳನ್ನು ಖರೀದಿಸಿದ ಒಟ್ಟು ಮೊತ್ತವಾದ **ರೂ.4,55,880/–ಗಳನ್ನು (ನಾಲ್ಕು ಲಕ್ಷದ ಐವತ್ತೈದು ಸಾವಿರದ ಎಂಟುನೂರ ಎಂಬತ್ತು) ಕಡ್ಡಾಯ ನಿವೃತ್ತಿ ನಂತರ ಲಭ್ಯವಾಗುವ ಮೊತ್ತದಿಂದ (ಪಿಂಚಣಿ ಸೌಲಭ್ಯ ಮುಂತಾದವುಗಳಿಂದ) ವಸೂಲಿ ಮಾಡಲು** ಹಾಗೂ ಈ ಮೊತ್ತವನ್ನು ವಸೂಲಿ ಮಾಡಲಾಗದೆ ಯಾವುದಾದರು ಮೊತ್ತ ಉಳಿದಲ್ಲಿ ಅಂತಹ ಮೊತ್ತ ವಸೂಲಾತಿಗೆ ಸಾರ್ವಜನಿಕ ಶಿಕ್ಷಣ ಇಲಾಖಾ ಆಯುಕ್ತರು ಸಿವಿಲ್ ಸೂಟ್ ದಾಖಲಿಸಿ ವಸೂಲಿ ಮಾಡಲು ಈ ಮೂಲಕ ಆದೇಶಿಸಿದೆ. ಈ ಪ್ರಕರಣದಲ್ಲಿ ಸದರಿಯವರು **ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತಿನ ಅವಧಿ ಎಂದೇ** ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಫ್.ಆರ್.ಸಂಬರಗಿ**

ಪಿ.ಆರ್. 1232

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ, (ಸೇ–1,2)

## ಕಂದಾಯ ಸಚಿವಾಲಯ

**ವಿಷಯ:** ಬೆಳಗಾವಿ ಜಿಲ್ಲೆಯ ರಾಮದುರ್ಗ ತಾಲ್ಲೂಕಿನ ಮುದಕವಿ ಹೋಬಳಿಯ ಉಮತಾರ ಗ್ರಾಮದ ಸ.ನಂ.193 ರಲ್ಲಿರುವ ಮೂಲ ಹೆಸರುಗಳನ್ನು ತೆಗೆದುಹಾಕಿ ಬೇರೆಯವರ ಹೆಸರಿಗೆ ಅಕ್ರಮವಾಗಿ ಖಾತೆ ಬದಲಾವಣೆ ಮಾಡಿರುವ ಕುರಿತು ಸಮಗ್ರವಾಗಿ ತನಿಖೆ ನಡೆಸಲು ತಂಡ ರಚಿಸುವ ಬಗ್ಗೆ

**ಓದಲಾಗಿದೆ:** ವಿಧಾನ ಪರಿಷತ್ತಿನ ಮಾನ್ಯ ಸದಸ್ಯರಾದ ಶ್ರೀ ಬಸವರಾಜ ಎಸ್.ಹೊರಟ್ಟಿ ಇ ವರ ದಿನಾಂಕ: 13-10-2004ರ ಪತ್ರ.

**ಪ್ರಸ್ತಾವನೆ:**

ಮೇಲೆ ಉಲ್ಲೇಖಿಸಲಾದ ದಿನಾಂಕ:13-10-2004ರ ಪತ್ರದೊಂದಿಗೆ ಬೆಳಗಾವಿ ಜಿಲ್ಲೆಯ ರಾಮದುರ್ಗ ತಾಲ್ಲೂಕಿನ ಮುದಕವಿ ಹೋಬಳಿಯ ಉಮತಾರ ಗ್ರಾಮದ ಸ.ನಂ.193 ರಲ್ಲಿರುವ 12-02 ಗುಂಟೆ ಜಮೀನು ಬಗ್ಗೆ ದಿನಾಂಕ:09-10-2004, 04-10-2004 ಮತ್ತು 14-10-2004 ರಂದು ಖಾತೆ ಬದಲಾವಣೆ ಮಾಡಿ ಇ ದರ ಉತಾರಗಳ ಪ್ರತಿಗಳನ್ನು ಮಾನ್ಯ ಶಾಸಕರು ಲಗತ್ತಿಸಿ ಸರ್ಕಾರದ ಕಾರ್ಯದರ್ಶಿ, ಕಂದಾಯ ಇ ಲಾಖೆ ಇ ವರಿಗೆ ನೀಡಿರುತ್ತಾರೆ. ಮಾನ್ಯ ಶಾಸಕರು ತಿಳಿಸಿರುವಂತೆ ಸದರಿ ಜಮೀನಿನ ಬಗ್ಗೆ ರಾಮದುರ್ಗ ತಹಶೀಲ್ದಾರ್; ಉಪ ವಿಭಾಗಾಧಿಕಾರಿ, ಬೈಲಹೊಂಗಲ ಹಾಗೂ ಬೆಳಗಾವಿ ಜಿಲ್ಲಾಧಿಕಾರಿಗಳ ನ್ಯಾಯಾಲಯದಲ್ಲಿ ವ್ಯಾಜ್ಯ ನಡೆದಿದ್ದು ಮತ್ತು ಕೋರ್ಟ್‌ನಲ್ಲಿ ತೀರ್ಮಾನ ಆಗಿ ಈ ಜಮೀನು ದಿನಾಂಕ:10-02-2003 ರಂದು ಕೋರ್ಟ್ ಡಿಕ್ರಿ ನಂ.2571 ರ ಪ್ರಕಾರ ಶ್ರೀಮತಿ ಮುಧೋಳ್ ಶಿವನವ್ವ ಕೋಂ ನಾಗಪ್ಪ ಮತ್ತು ಶ್ರೀಮತಿ ಪೂಜಾರ್ ಸಿದ್ದವ್ವ ಕೋಂ ಕರಿಯಪ್ಪ ಇ ವರುಗಳ ಪರವಾಗಿ ಆಗಿರುತ್ತದೆ ಎಂದು ತಿಳಿಸುತ್ತಾ, ಸದರಿ ಗ್ರಾಮದ ಗ್ರಾಮಲೆಕ್ಕಾಧಿಕಾರಿ ಹಾಗೂ ಮುದಕವಿ ಹೋಬಳಿಯ ಕಂದಾಯ ನಿರೀಕ್ಷಕರುಗಳು ಈ ಹೆಣ್ಣು ಮಕ್ಕಳ ಹೆಸರುಗಳನ್ನು ಆರ್.ಟಿ.ಸಿ.ರೆಕಾರ್ಡ್‌ನಿಂದ ಕಡಿಮೆ ಮಾಡಿ ಬೇರೆಯವರ ಹೆಸರಿಗೆ ದಾಖಲೆ ಮಾಡಿರುತ್ತಾರೆಂದು ದೂರಿರುತ್ತಾರೆ. ಈ ಅಂಶವನ್ನು ಪರಿಶೀಲಿಸಿ ನೋಡಿದಾಗ ಸುಮಾರು ಎರಡು ತಿಂಗಳ ಅವಧಿಯಲ್ಲಿ ಮೇಲೆ ಉಲ್ಲೇಖಿಸಲಾದ ಜಮೀನಿನ ಬಗ್ಗೆ ನಿಯಮಗಳನ್ನು ಗಾಳಿಗೆ ತೂರಿ ಅಕ್ರಮವಾಗಿ ಮೂರು ಸಲ ಖಾತೆ ಬದಲಾವಣೆ ಮಾಡಿರುವುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಈ ವಿಷಯವನ್ನು ಸರ್ಕಾರ ಸಮಗ್ರವಾಗಿ ತನಿಖೆ ಮಾಡಲು ನಿರ್ಧರಿಸಿ ಸದರಿ ತನಿಖಾ ದಳವನ್ನು ಈ ಕೆಳಗಿನಂತೆ ರಚಿಸಿ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 488 ಬಿಎಂಎಂ 2004, ಬೆಂಗಳೂರು, ದಿನಾಂಕ: 2ನೇ ನವೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆಯ ರಾಮದುರ್ಗ ತಾಲ್ಲೂಕಿನ ಮುದಕವಿ ಹೋಬಳಿಯ ಉಮತಾರ ಗ್ರಾಮದ ಸ.ನಂ.193 ರಲ್ಲಿನ 12-02 ಗುಂಟೆ ಜಮೀನಿನ ಬಗ್ಗೆ ದಿನಾಂಕ:10-09-2004, 04-10-2004 ಮತ್ತು 14-10-2004 ರಂದು ಬೇರೆ ಬೇರೆಯವರ ಹೆಸರಿನಲ್ಲಿ ಖಾತೆ ಬದಲಾವಣೆ ಮಾಡಿರುವುದನ್ನು ಸಮಗ್ರವಾಗಿ ತನಿಖೆ ನಡೆಸಲು:-

1) ಶ್ರೀ ಸೊನ್ನದ್, ಕೇಂದ್ರಸ್ಥಾನಿಕ ಸಹಾಯಕರು, ಬೆಳಗಾವಿ ಜಿಲ್ಲಾಧಿಕಾರಿಗಳ ಕಛೇರಿ, ಬೆಳಗಾವಿ;
2) ಡಾ.ವಿಜಯಕುಮಾರ್ ತೊರಗಲ್, ಉಪವಿಭಾಗಾಧಿಕಾರಿ, ಬೈಲಹೊಂಗಲ ಉಪವಿಭಾಗ, ಬೆಳಗಾವಿ ಜಿಲ್ಲೆ;
3) ಶ್ರೀ ಎ.ಸುಬ್ರಮಣ್ಯ ಶಾಸ್ತ್ರಿ, ಶಿರಸ್ತೇದಾರ್, ವಿಶೇಷ ಕೋಶ, ಕಂದಾಯ ಇ ಲಾಖೆ.

ಇ ವರುಗಳನ್ನು ಒಳಗೊಂಡು ತನಿಖಾ ದಳವನ್ನು ರಚಿಸಿ ಆದೇಶಿಸಲಾಗಿದೆ. ಸದರಿ ತಂಡವು ರಾಮದುರ್ಗ ತಾಲ್ಲೂಕು ಕಛೇರಿಗೆ ಬೇಟಿ ನೀಡಿ ಉಮತಾರ ಗ್ರಾಮದ ಸ.ನಂ.193 ರಲ್ಲಿನ 12-02 ಗುಂಟೆ ಜಮೀನಿನ ಖಾತೆ ಬದಲಾವಣೆಗೆ ಸಂಬಂಧಿಸಿದ ದಾಖಲೆ ಗಳನ್ನು ಸಮಗ್ರವಾಗಿ ಪರಿಶೀಲಿಸಿ ಸರ್ಕಾರದ ಕಾರ್ಯದರ್ಶಿ, ಕಂದಾಯ ಇ ಲಾಖೆ ಇ ವರಿಗೆ ಒಂದು ವಾರದೊಳಗಾಗಿ ತಮ್ಮ ಸ್ಪಷ್ಟ ಅಭಿಪ್ರಾಯ ದೊಂದಿಗೆ ವರದಿಯನ್ನು ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಬಿ.ಗಣಾಚಾರಿ**

1233

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇ ಲಾಖೆ (ಸೇವೆಗಳು-1).

## PUBLIC WORKS SECRETARIAT

**Sub:** Bangalore Mysore Infrastructure Corridor Project- Constitution of Review Committee – regarding.

**PREAMBLE:**

1.0 The Karnataka Government, in order to enhance the infrastructure facility in the State of Karnataka, has entered into an agreement with M/s Nandi Infrastructure Corridor Enterprises (NICEL) on 3rd April 1997. As per the said Framework Agreement, the Government has taken several measures to transfer the land to the company either by transfer of Government land or by acquisition of private land. The Government is also helping the company to achieve coordination between the various Departments of the Government so that the Project could be implemented expeditiously.

2.0 Recently, some of the land owners, whose lands were notified for acquisition, have questioned the land acquisition proceedings in respect of corridor formation as well as building up of townships, in Writ Petitions filed before the Hon'ble High Court of Karnataka. In addition to this, both the Houses of Legislature have debated the various aspects of the Project execution. Many Legislators have questioned the sincerity of the Project Company to implement the Project as per the framework agreement and have sought Government's intervention.

3.0 Hon'ble Chief Minister, while replying to the debate on the issue, has categorically stated that the project will continue and the Government would examine its implementation in the light of the debate in both the Houses of the Legislature.

4.0 In the light of the discussion, the Government proposes to constitute a Committee comprising with Shri K.C. Reddy, Advisor to Minister for Public Works & Energy as Chairman, ACS & Principal Secretary, Finance Department, Principal Secretary, Public Works Department, Principal Secretary, Commerce & Industries Dept., Principal Secretary, Urban Development Dept., Secretary to Govt.- I, Revenue Department, Commissioner, Bangalore Development Authority, Chief Executive Officer & Executive Member, KIADB as Members and Secretary to Government, Public Works Department as Member Convenor, and hence the following order.

**GOVERNMENT ORDER NO. PWD 155:CRM: 95:BMICP REVIEW COMMITTEE/2004**
**Date: 4th November 2004**

1.0 Government reaffirms the support to the Project. However, in view of the criticism regarding acquisition of more lands than necessary for the Project, Government has decided to constitute an Expert Committee comprising the following members as mentioned here under to go into details of lands under acquisitions and leased Government lands in respect of Bangalore – Mysore Infrastructure Corridor Project (BMICP).

| | |
|---|---|
| 1. Shri. K.C. Reddy, Advisor to Minister for Public Works & Energy | Chairman |
| 2. ACS & Principal Secretary, Finance Department | Member |
| 3. Principal Secretary, Public Works Department | Member |
| 4. Principal Secretary, Commerce & Industries Dept. | Member |
| 5. Principal Secretary, Urban Development Dept. | Member |
| 6. Secretary to Govt.-I, Revenue Department | Member |
| 7. Secretary to Govt., Law Department | Member |
| 8. Commissioner, Bangalore Development Authority | Member |
| 9. CEO & EM, KIADB | Member |
| 10. Secretary, Public Works Department | Member- Convenor. |

2.0 The above mentioned committee shall review of lands, whether the Government or acquired, will hereafter be handed over to the Project Company only on the recommendations of the Expert Committee to the effect that such lands are genuinely required for the project having regard to all relevant factors including road alignment. In respect of lands already handed over to the Project Company, if there is any dispute as regards their necessity for the project, the same shall be referred to the said Expert Committee for its recommendation.

3.0 The constitution of the Committee shall however not result in any delay in implementation of the project and the matters referred to it may be disposed off on day-to-day basis. The Committee may co-opt members if necessary. It may also invite and hear the views of the Project Company whenever necessary. The recommendations of the Committee will be valid even if some members were not present for a meeting.

4.0 The Committee shall submit periodical reports about its decisions for consideration information of the Government. First such report shall be submitted within a month. Apart from deciding on need for specific land for the project, the Committee may make any other recommendations concerning the project as it may consider necessary. Such recommendations shall be considered by the Government.

5.0 The terms of reference of the Committee will be as follows.

1. Review the designs and technical reports including drawings in respect of the Corridor Project, Expressway including Elevated Road, Peripheral Road, Link Road and Townships.
2. Five townships were proposed in the Framework Agreement. Whether this has been adhered to as per the agreement.
3. The Committee should also assess whether more land has been acquired than necessary.
4. Review the Framework Agreement of the BMICP and suggest modification if needed. It should also suggest changes in the Arbitration clauses where as per the present position, Arbitration is to be held in London or any other place mutually agreeable by the parties.
5. Whether human misery is caused by taking over agricultural lands under unauthorised occupation, tenanted lands and revenue pockets, which have been built.
6. Whether the Company has taken the development of the Corridor as per the road alignment approved by the Technical Experts of the Government. Whether the lands have been notified as per the road alignment and whether lands not connected with the alignment have been notified.
7. Whether the Company has raised the finances mortgaging the Government property.

BY ORDER AND IN THE NAME OF GOVERNOR OF KARNATAKA,

**B.A. VIJAYA**

PR-1235

Under Secretary to Government,
Public Works Department (EAP).

**FOREST, ECOLOGY & ENVIRONMENT SECRETARIAT**

**CIRCULAR**

**No. FEE/77 Secy (E&E) 2004, Bangalore, Dated 5th November 2004**

I have taken charge as Secretary to Government (Ecology and Environment), Forest, Ecology and Environment Department, with effect from 4-1-2004 forenoon vide Notification No. DPAR 607 SAS 2004 dated 30-10-2004. Correspondence may please be sent to the following address.

Sadashivaiah, Secretary to Government (Ecology and Environment),
Forest, Ecology and Environment Department, Room No. 709, 7th Floor, Multistoried Building, Bangalore-560 001.
Phone: Off: 22254377 / 2092445, Fax: 22254377, Res: 22268613

**Sadashivaiah**

PR-1236

Secretary (Ecology and Environment),
Forest, Ecology and Environment Department.

**ಜಲ ಸಂಪನ್ಮೂಲ ಸಚಿವಾಲಯ**

**ತಿದ್ದುಪಡಿ ಆದೇಶ**

**ಸಂಖ್ಯೆ: ಸನೀಇ 109 ಕೆಜಿದು 2004, ಬೆಂಗಳೂರು, ದಿನಾಂಕ: 5ನೇ ನವೆಂಬರ್ 2004**

ಚಾಮರಾಜನಗರ ಜಿಲ್ಲೆ ಹಾಗೂ ತಾಲ್ಲೂಕಿನ ನಾಗವಳ್ಳಿ ಕೆರೆಯನ್ನು ಕಾವೇರಿ ನೀರಾವರಿ ನಿಗಮ ನಿಯಮಿತಕ್ಕೆ ವಹಿಸಲಾಗಿರುವ ವಿಷಯಕ್ಕೆ ಸಂಬಂಧಿಸಿದಂತೆ ಹೊರಡಿಸಲಾದ ಆದೇಶ ಸಂಖ್ಯೆ: ಸನೀಇ 109 ಕೆಜಿದು 2004, ದಿನಾಂಕ: 28.9.2004ರ ಆದೇಶ ಭಾಗದ ಕ್ರ.ಸಂ. 3 ಮತ್ತು 4 ರಲ್ಲಿಯ ಷರತ್ತುಗಳನ್ನು ಹಿಂತೆಗೆದುಕೊಳ್ಳಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1237

**ಹೆಚ್.ಎಸ್. ಉದಯಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).